# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮುನಿರಾಜುಗೌಡ ಪಿ.ಎಂ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1304

ಉತ್ತರಿಸಬೇಕಾದ ದಿನಾಂಕ : 08-03-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ಕೋಲಾರ ಇಲ್ಲಿ ಸರ್ಕಾರದಿಂದ ಹೆಚ್ಚಿಗೆ ಬಡ್ಡಿ ವಸೂಲಿ (Claim) ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಬಂದಿದೆ. |
| ಆ) | ಈ ಬಗ್ಗೆ ಜಂಟಿ ನಿಬಂಧಕರು ಕಲಂ 65 ರ ದಿನಾಂಕ:21.10.2021 ರ ಪರಿವೀಕ್ಷಣೆ ನಡೆಸದಿರಲು ಕಾರಣವೇನು? | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಕೆ.ಜಿ.ಎಫ್ ಶಾಖೆಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ನಿಗಧಿಪಡಿಸಿರುವ ಬಡ್ಡಿದರಕ್ಕಿಂತ ಬ್ಯಾಂಕಿನವರು ಹೆಚ್ಚು ಬಡ್ಡಿ ಕ್ಲೈಂ ಮಾಡಿರುತ್ತಾರೆಂದು ಆರೋಪಿಸಿ ಮಾಜಿ ಶಾಸಕರಾದ ಶ್ರೀ ವೈ. ಸಂಪಂಗಿ ಇವರು ನಿಬಂಧಕರಿಗೆ ದೂರನ್ನು ನೀಡಿರುತ್ತಾರೆ.<br><br>ಸದರಿ ದೂರರ್ಜಿ ಆಧಾರದ ಮೇಲೆ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರು ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಹಕಾರ ಗ್ರಾಹಕರ ಮಹಾಮಂಡಳ, ಬೆಂಗಳೂರು ಇವರನ್ನು ಕಲಂ 65 ರ ಪರಿವೀಕ್ಷಣಾಧಿಕಾರಿಯಾಗಿ ದಿ:21.10.2021 ರಂದು ನೇಮಿಸಿ ಆದೇಶ ಹೊರಡಿಸಲಾಗಿತ್ತು.<br><br>ಆದರೆ ಸದರಿ ಅಧಿಕಾರಿಯು ದಿನಾಂಕ:09.11.2021 ರಂದು ಜಂಟಿ ನಿಬಂಧಕರಿಗೆ ಮನವಿ ಸಲ್ಲಿಸಿ, ತಾವು ಎರವಲು ಸೇವೆಯ ಮೇಲೆ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಪರಿವೀಕ್ಷಣೆ ಕಾರ್ಯ ಕೈಗೊಳ್ಳಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿದ್ದರಿಂದ ಸದರಿ ಪರಿವೀಕ್ಷಣಾಧಿಕಾರಿಯನ್ನು ಬದಲಾಯಿಸಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರು ದಿನಾಂಕ:18-11-2021 ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, 4ನೇ ವಲಯ, ಬೆಂಗಳೂರು ನಗರ ಜಿಲ್ಲೆ ಇವರನ್ನು ಕಲಂ 65 ರ ಪರಿವೀಕ್ಷಣಾಧಿಕಾರಿಯಾಗಿ ನೇಮಿಸಿದ್ದು, ಪ್ರಸ್ತುತ ಪರಿವೀಕ್ಷಣೆಯು ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ : ಸಿಒ 46 ಸಿಸಿಬಿ 2022

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು